# ಶ್ರೀ ಮ ದ್ರಾ ಘ ವೇ ೦ ದ್ರ ಗು ರ ವೇ ನ ಮಃ

**ಪೂಜ್ಯಾಯ ರಾಘವೇಂದ್ರಾಯ ಸತ್ಯ ಧರ್ಮ ರತಾಯಚ ।**
**ಭಜತಾಂ ಕಲ್ಪವೃಕ್ಷಾಯ ನಮತಾಂ ಕಾಮಧೇನವೇ ॥**

ಕಾಮಧೇನುಗಳೂ ಸತ್ಯ ಮತ್ತು ಧರ್ಮದಲ್ಲಿ ಆಸಕ್ತರೂ, ಭಜಿಸುವವರಿಗೆ ಕಲ್ಪವೃಕ್ಷವೂ, ನಮಿಸುವವರಿಗೆ ಆದ ಪೂಜ್ಯರಾದ ರಾಘವೇಂದ್ರರನ್ನು ನಮಿಸುವುದು.

**ಮೂಕೋಪಿ ಯತ್ಪ್ರಸಾದೇನ । ಮುಕುಂದ ಶಯನಾಯತೇ ।**
**ರಾಜ ರಾಜಾಯತೇ ರಿಕ್ತೋ । ರಾಘವೇಂದ್ರಂ ತಮಾಶ್ರಯೇ ॥**

ಯಾರ ಅನುಗ್ರಹದಿಂದ ಮೂಕನೂ ವಾಕ್‌ಪಟುವಾಗಬಲ್ಲ; ದರಿದ್ರನೂ ರಾಜನಾಗಬಲ್ಲ ; ಅಂತಹ ರಾಘವೇಂದ್ರರನ್ನು ಶರಣು ಹೋಗುವೆ.

**ಗುರುಶ್ರೀ ರಾಘವೇಂದ್ರಾಯ ತ್ವಾಮಹಂ ಶರಣಂ ಗತಃ ।**
**ಆಯುರಾರೋಗ್ಯಮೈಶ್ವರ್ಯಂ ದತ್ವಾ ತ್ವಂ ರಕ್ಷ ರಕ್ಷಮಾಂ ॥**

ಗುರುಗಳಾದ ರಾಘವೇಂದ್ರರೇ । ನಿಮ್ಮನ್ನೇ ಆಶ್ರಯಿಸಿ ಬಂದಿದ್ದೇನೆ. ಆಯುಸ್ಸು, ಆರೋಗ್ಯ, ಐಶ್ವರ್ಯ, ಇವುಗಳನ್ನು ನೀಡಿ ನಮ್ಮನ್ನು ರಕ್ಷಿಸಿರಿ.

**ದುರ್ವಾದಿಧ್ವಾಂತರವಯೇ ವೈಷ್ಣವೇಂದೀವರೇಂದವೇ ।**
**ಶ್ರೀ ರಾಘವೇಂದ್ರ ಗುರವೇ ನಮೋಽತ್ಯಂತ ದಯಾಲವೇ ॥**

ಕುವಾದಿಗಳೆಂಬ ತಮಸ್ಸಿಗೆ ಸೂರ್ಯನ ಹಾಗಿರುವ, ವೈಷ್ಣವರೆಂಬ ಕುಮುದ ಪುಷ್ಪಗಳಿಗೆ ಚಂದ್ರನಂತಿರುವ, ಕಾರುಣ್ಯ ಸಿಂಧುಗಳಾದ, ರಾಘವೇಂದ್ರ ಗುರುಗಳಿಗೆ ಪ್ರಣಾಮಗಳು.

**ರಾ ಗ – ಆ ನ ಂ ದ ಭೈ ರ ವಿ : ತಾ ಳ – ಏ ಕ ತಾ ಳ**

ರಾಯಬಾರೋ ತಂದೆತಾಯಿ ಬಾರೋ ನಮ್ಮನ್ ಕಾಯಿ ಬಾರೋ
ಮಾಯಿಗಳ ಮರ್ದಿಸಿದ ರಾಘವೇಂದ್ರ ರಾಯ ಬಾರೋ ।ಪ।

ಭಾಸುರಚರಿತನೆ ಭೂಸುರವಂದ್ಯನೆ
ಶ್ರೀಸುಧೀಂದ್ರಾರ್ಯರ ವರಪುತ್ರ ರಾಯ ಬಾರೋ
ಶ್ರೀಸುಧೀಂದ್ರಾರ್ಯರ ವರಪುತ್ರನೆನಿಸಿದ
ದೇಶಿಕರೊಡೆಯನೆ ರಾಘವೇಂದ್ರ ರಾಯ ಬಾರೋ ।೧।

ವಂದಿಪ ಜನರಿಗೆ ಮಂದಾರ ತರುವಂತೆ
ಕುಂದದಭೀಷ್ಟೆಯ ಸಲಿಸುತಿಪ್ಪ ರಾಯ ಬಾರೋ
ಕುಂದದಭೀಷ್ಟೆಯ ಸಲಿಸುತಿಪ್ಪ ಸುರಮಣಿ
ಮಂದನ ಮತಿಗೆ ರಾಘವೇಂದ್ರ ರಾಯ ಬಾರೋ ।೨।

ಆರು ಮೂರು ಏಳು ನಾಲ್ಕು ಎಂಟು ಗ್ರಂಥ ಸಾರಾರ್ಥ
ತೋರಿಸಿದಿ ಸರ್ವರಿಗೆ ನ್ಯಾಯದಿಂದ ರಾಯ ಬಾರೋ
ತೋರಿಸಿದಿ ಸರ್ವರಿಗೆ ನ್ಯಾಯದಿಂದ ಸರ್ವಜ್ಞ
ಸೂರಿಗಳರಸನೆ ರಾಘವೇಂದ್ರ ರಾಯ ಬಾರೋ ।೩।

ರಾಮಪದಸರಸೀರುಹಭೃಂಗ ಭಕ್ತಕೃಪಾಪಾಂಗ
ಭ್ರಾಮಕಜನರ ಸನ್ಮಾನಭಂಗ ರಾಯ ಬಾರೋ
ಭ್ರಾಮಕಜನರ ಸನ್ಮಾನಭಂಗ ಮಾಡಿದ
ಧೀಮಂತರೊಡೆಯನೆ ರಾಘವೇಂದ್ರ ರಾಯ ಬಾರೋ ।೪।

ಭೂತಳನಾಥನ ಭೀತಿಯ ಬಿಡಿಸಿದೆ
ಪ್ರೇತತ್ವ ಕಳೆದೆ ಮಹಿಷಿಯ ರಾಯ ಬಾರೋ
ಪ್ರೇತತ್ವ ಕಳೆದೆ ಮಹಿಷಿಯ ಶ್ರೀ ಜಗ-
ನ್ನಾಥವಿಟ್ಠಲನ ಪ್ರೀತಿಪಾತ್ರ ರಾಘವೇಂದ್ರ ರಾಯ ಬಾರೋ । ೫ ।

**ರಾ ಗ – ಮ ಧ್ಯ ಮಾ ವ ತಿ : ತಾ ಳ – ಅ ಟ ತಾ ಳ**

ಬಾರೋ ಗುರು ರಾಘವೇಂದ್ರ ।
ಬಾರಯ್ಯ ಬಾ ಬಾ ಬಾರೋ ಗುರು ರಾಘವೇಂದ್ರ । ಪ ।

ಹಿಂದು ಮುಂದಿಲ್ಲೆನಗೆ ನೀ ಗತಿ ಯೆಂದು ನಂಬಿದೆ ನಿನ್ನ ಪಾದವ ।
ಬಂಧನವ ಬಿಡಿಸೆನ್ನ ಕರಪಿಡಿ ನಂದಕಂದ ಮುಕುಂದ ಬಂಧು । ಅ ಪ ।

ಸೇವಕನೆಲೊ ನಾನು । ಧಾವಿಸಿ ಬಂದೆನು । ಸೇವೆಯ ನೀಡೆಲೊ ನೀನು ।
ಸೇವಕನ ಸೇವೆಯನು ಸೇವಿಸಿ । ಸೇವ್ಯ ಸೇವಕ ಭಾವವೀಯುತ ।
ತಾವುಗಾಣಿಸಿ ಪೊರೆಯೊ ಧರೆಯೊಳು । ಪಾವನಾತ್ಮಕ ಕಾವ ಕರುಣಿ । ೧ ।

ಕರೆದರೆ ಬರುವಿಯೆಂದು । ಸಾರುವುದು ಡಂಗುರ ।
ತ್ವರಿತದಿ ಒದಗೋ ಬಂದು ॥ ಜರಿಯ ಬೇಡವೊ ಬರಿದೆ ನಿನ್ನಯ ।
ವಿರಹ ತಾಳದೆ ಮನದಿ ಕೊರಗುವೆ ॥
ಹರಿಯ ಸ್ಮರಣೆಯ ನಿರುತದಲಿ ಎನಗ್ಹರುಷದಲಿ ನೀ ನಿರುತ ಕೊಡುತಲಿ । ೨ ।

ನರಹರಿ ಪ್ರಿಯನೇ ಬಾ । ಗುರುಶ್ರೀಶವಿಟ್ಠಲನ
ಕರುಣಾಪಾತ್ರನೇ ಬೇಗ ಬಾ ॥ ಗುರುವರನೆ ಪರಿಪೋಷಿಸೆನ್ನನು ।
ಮರೆಯದಲೆ ತವ ಚರಣಕೋಟಿಯ
ಲಿರಿಸಿ ಚರಣಾಂಬುಜವ ತೋರುತ ತ್ವರಿತದಲಿ ಓಡೋಡಿ ಬಾ ಬಾ । ೩ ।

## ರಾಗ : ಶಂಕರಾಭರಣ ಏಕತಾಳ

ನೀ ಪಾಲಿಸೋ ಗುರುರಾಯ ಎನ್ನ । ಕಾಪಾಡೀಗ ಮಹರಾಯ ॥ ಪ ॥

ಭೂಪತಿ ನೀ ಎನ್ನ ಅಪದ್ಭಾಂಧವ ।
ಶ್ರೀಪತಿ ಪದ ಪ್ರಿಯ ಈಪರಿ ಮಾಡದೆ ॥ ಅಪ ॥
ಪಾಪಿಗಳೊಳಗೆ ಹಿರಿಯನು ನಾ ।
ನಿಷ್ಪಾಪಿಗಳರಸೆ ಗುರುರಾಯ ॥
ಅಪಾರ ಜನುಮದಿ ಬಂದಿಹ ।
ತಾಪತ್ರಯ ಕಳಿ ಮಹರಾಯಾ ॥ ೧ ॥
ನೀಚರ ಒಳಗೆ ನೀಚನೊ ಪಾಪ ।
ಮೋಚನೆ ಮಾಡೋ ಗುರುರಾಯ ॥
ಯೋಚನೆ ಇಲ್ಲದೆ ಅನ್ಯರ ಅನುದಿನ ।
ಯಾಚಿಸಿ ಕೆಟ್ಟೆನೊ ಮಹರಾಯಾ ॥ ೨ ॥
ದೀನರ ಒಳಗೆ ದೀನನು ನಾನೈ ।
ದಾನಿಗಳರಸೇ ಗುರುರಾಯ ॥
ಜ್ಞಾನವು ಇಲ್ಲದೆ ನಾನು ನನದೆಂದು ।
ಹೀನ ಮತ್ಯಾದೆನೊ ಗುರುರಾಯ ॥ ೩ ॥
ಅನ್ನವು ಇಲ್ಲದೆ ಅನ್ಯರ ಮನೆಯಲಿ ।
ಕುನ್ನಿಯಾದನೋ ಗುರುರಾಯ ॥
ನಿನ್ನನೆ ನಂಬಿ ಅನ್ಯರಬೇಡೊದು ।
ಘನ್ನತಿ ನಿನಗೆ ಮಹರಾಯಾ ॥ ೪ ॥
ದಾತನೆ ನಿನ್ನಾ ಪೋತನು ನಾನೀ ।

ರೀತಿಯ ಮಾಳ್ಪರೆ ಗುರುರಾಯ ॥
ನೀತ ಗುರುಜಗನ್ನಾಥವಿಠಲ ಪದ ।
ದೂತನು ನೀನೆ ಮಹರಾಯಾ ॥ ೫ ॥

**ರಾಗ : ಶ್ರೀ ಏಕತಾಳ**

ಕಾಯೋ – ಕಾಯೋ ॥ ಪ ॥
ಕಾಯೋ ಕಾಯೋ ಗುರುರಾಯನೆ ತವ ಪದ ।
ತೋಯಜ ಯುಗ ಎನ್ನ ಕಾಯದಲಿಟ್ಟು ॥ ಅ ಪ ॥
ಕ್ಷುಲ್ಲಕ ಮನುಜರ ಸೊಲ್ಲನೆ ನೀಗಿಸಿ ।
ಹಲ್ಲನೆ ಮುರಿಯುವ ಬಲ್ಲಿದ ನೀನೇ ॥ ೧ ॥
ಕ್ಷುದ್ರಮನುಜರೋ ಪದ್ರವ ಕಳೆದು ।
ಭದ್ರ ಭಕುತಿಯ ಉದ್ರೇಕವಿತ್ತು ॥ ೨ ॥
ತ್ವತ್ಸೇವಾ ಜನರಲಿ ಮತ್ಸರ ಮಾಡುವ ।
ಕುತ್ಸಿತ ಜನರಲಿ ವಿಚ್ಛೇದ ಮಾಡುವ ॥ ೩ ॥
ನಿನ್ನಯ ಜನರನ ಮನ್ನಣೆ ಮಾಡದೆ ।
ಬನ್ನವ ಬಡಿಪರ ಖಿನ್ನರ ಮಾಡೀ ॥ ೪ ॥
ದೂತರ ನಿಚಯಕೆ ಈ ತೆರ ಚಿಂತೆಯು ।
ಯಾತಕೆ ಗುರುಜಗನ್ನಾಥವಿಠಲ ದೂತಾ ॥ ೫ ॥

## ರಾಗ : ಆರಭಿ – ಆದಿತಾಳ

ಶ್ರೀ ಗುರುವರ ಮಾಂ ಪಾಲಯ ಭೋ ।
ಶ್ರೀ ಗುರುವರ ಮಾಂ ಪಾಲಯ ಭೋ ॥ ಪ ॥
ದೀನಂ, ತ್ವತ್ಪದಧೀನಂ, ಸದ್ಗುಣಹೀನಂ
ಮಾಂ ಪಾಲಯ ಭೋ ॥ ಅಪ ॥
ಆರ್ತಿಂ ಹರ, ಭವ ವಾರ್ತಿಂ, ತವ ಸಂಕೀರ್ತನಂ
ದಿಶ ಸದಾ ಕರುಣಾಕರ ಭೋ ॥ ೧ ॥
ರುದ್ಧಂ ಭವಗುಣ ಬದ್ಧಂ ಜನಸುವಿ
ರುದ್ಧಂ, ಗುರೋ ಮಾಮುದ್ಧರ ಭೋ ॥ ೨ ॥
ಮಗ್ನಂ, ಸ್ತ್ರೀಸುತ ಲಗ್ನಂ, ತ್ವತ್ಪದ
ಲಗ್ನಂ, ಕುರು ಕರುಣಾಕರ ಭೋ ॥ ೩ ॥
ಪುತ್ರಂ, ಸಜ್ಜನ ಮಿತ್ರಂ, ತ್ವದ್ಗುಣ
ಚಿತ್ರಂ ಜ್ಞಾಪಯ ಶತೃಹ ಭೋ ॥ ೪ ॥
ಹೀನಂ, ದುರ್ಗುಣ ಮಾನಿಂ, ತ್ವದ್ಗುಣ
ಜ್ಞಾನಿಂ ಕುರು ಕರುಣಾಕರ ಭೋ ॥ ೫ ॥
ಭಕ್ತಂ, ಸಜ್ಜನ ಸಕ್ತಂ, ವಿಷಯ ವಿ–
ರಕ್ತಂ ಕುರು ಕರುಣಾಕರ ಭೋ ॥ ೬ ॥
ದೂತಂ, ಭವ ಭಯ ಭೀತಂ, ಸದ್ಗುಣ
ಖ್ಯಾತಂ, ಯತಿವರ ಕುರು ಮಾಂ ಭೋ ॥ ೭ ॥
ಪೋತಂ, ಶ್ರುತಿ ಸ್ಮೃತ್ಯ ದೀತಂ, ಪಾಪ ವಿ–
ಧೂತಂ ಕುರು ಸತ್ವರ ಮಾಂ ಭೋ ॥ ೮ ॥
ದಾಸಂ ಸ್ತ್ರೀ ಕರ ವಾಸಂ, ತ್ವತ್ಸಹ
ವಾಸಂ ಸಂದಿಶ ಸಂತತ ಭೋ ॥ ೯ ॥
ಮೂಢಂ, ಭವನಿಧಿ ಗಾಢಂ, ತ್ವತ್ಪದ

ರೂಢಂ, ಗುರುವರ ಕುರು ಮಾಂ ಭೋ ॥ ೧೦ ॥
ಚಾರಂ, ನಿರ್ಗತ ಸಾರಂ, ಬಂಧ ವಿ–
ದೂರಂ ಕುರು ಕರುಣಾರ್ಣವ ಭೋ ॥ ೧೧ ॥
ಬಾಲಂ, ತ್ವದ್ಗುಣ ಶೀಲಂ, ತ್ವತ್ಪದ
ಲೋಲಂ ಕುರು ತ್ವಂ ಕುರು ಮಾಂ ಭೋ ॥ ೧೨ ॥
ಪೋತಂ, ಸ್ವಾಮ್ಯವ ಧೂತಂ, ವಿಸ್ತೃತ
ಖ್ಯಾತಿಂ ಕಾರಯ ಕಾರಯ ಭೋ ॥ ೧೩ ॥
ವ್ಯರ್ಥಂ, ದಾಪಯ ಮೇ**s**ರ್ಥಂ ಕುರು ಸುಕೃ
ತಾರ್ಥಂ ಯತಿವರ ಮಾಮವ ಭೋ ॥ ೧೪ ॥
ದಾತಾ ಗುರುಜಗನ್ನಾಥವಿಠಲ
ದೂತಾಗ್ರೇಸರ ಪಾಲಯ ಭೋ ॥ ೧೫ ॥

## ರಾಗ : ಅಸಾವೇರಿ ಝಂಪೆತಾಳ

ಶೇಷಾಂಶ ಪ್ರಹ್ಲಾದರಾಯಾ ಎನ್ನ ।
ದೋಷ ಎಣಿಸದೆ ಕಾಯೋ ಜೀಯಾ ॥ ಪ ॥

ಕಂಡ ಕಂಡವರ ಭಜಿಸೀ ಬೇಡಿ । ಬೆಂಡಾದೆ ನಿನ್ನಂಘ್ರಿ ತ್ಯಜಿಸೀ ॥
ತೋಂಡವತ್ಸಲ ಕರುಣೆ ಸಲಿಸೀ ಪಾದ ।
ಪುಂಡರೀಕಾಕ್ಷ್ಯನ್ನೊಳಗೆ ಇರಿಸಿಕಾಯೋ ॥ ೧ ॥

ಮಾಡಬಾರದ ಕೃತ್ಯವಾ ನಾ ಬಲು । ಮಾಡಿದೆ ಗೃಹಕೃತ್ಯವಾ ॥
ಬೇಡದಲೆ ಭೃತ್ಯತ್ವವಾ ಈ ದೋಷ । ನೋಡದಲೆ ಭಕ್ತತ್ವವಾ ನೀಡೊ ॥ ೨ ॥

ದೀನ ಜನಪಾಲ ನಿನ್ನಾ ರೂಪ । ಧೇನಿಸದೆ ಮಾನಿನಿಯರನ್ನಾ ॥

ಧ್ಯಾನ ಮಾಡಿದೆ ಬಿಡದೆ ಘನ್ನಾ ಗತಿ ।
ಏನು ಪೇಳಯ್ಯಾ ಎನಗೆ ಮುನ್ನಾ ಸ್ವಾಮಿ ॥ ೩ ॥

ಗುರುರಾಘವೇಂದ್ರರಾಯ ಎನ್ನ ಕರೆದು ಕೈ ಪಿಡಿಯೊ ಮಹರಾಯ ॥
ತರಿಯೊ ಪಾತಕವೆನ್ನ ಜೀಯಾ ।
ಶರಣು ಪೊಕ್ಕೆನೊ ನಿನಗೆ ನಾನಯ್ಯಾ ಕರುಣೀ ॥ ೪ ॥

ಮಾತ ಪಿತ ಭ್ರಾತ ಬಂಧೂ ಎನಗೆ । ನೀತಗತಿಕುಲ ಗೋತ್ರವೆಂದೂ ॥
ದಾತ ನಿನ್ನ ದೂತನೆಂದೂ ಬಂದ । ನಾಥನನು ನೀ ಕಾಯುವುದು ಪ್ರಭುವೇ ॥ ೫ ॥

ಕರುಣಸಾಗರನೆ ಈತ ತವರೂಪ । ಸ್ಮರಣೆ ನೀಡೆನಗೆ ಬ್ಯಾಗಾ ॥
ಶರಣು ಪೊಕ್ಕವನ ವೇಗಾ ಭವ । ಅರಣ ದಾಟಿಸುವಂಥ ಯೋಗಾ ಪೇಳಿ ॥ ೬ ॥

ಹೋಗುತಿದೆ ಹೊತ್ತು ಪದುಮಾಕ್ಷ ಹ್ಯಾಗೆ । ಆಗುವುದೊ ನಿನ್ನ ಅಪರೋಕ್ಷ ॥
ಬಾಗಿ ಬೇಡುವೆ ಕಲ್ಪವೃಕ್ಷ ಸುರಧೇನೊ ।
ಜಾಗು ಮಾಡದೆ ಸಲಿಸ್ಯನ್ನಪೇಕ್ಷಾ ಸ್ವಾಮಿ ॥ ೭ ॥

ಧೀರ ಗುರುರಾಜ ಕೇಳೋ ಎನ್ನ । ಪಾರ ದೋಷಗಳನ್ನೆ ತಾಳೋ ॥
ಘೋರ ಅಜ್ಞಾನ ಕೀಳೋ ಪರಲೋಕ । ಸೇರಿಸೆನ್ನನು ಕೃಪಾಳೋ ಸ್ವಾಮಿ ॥ ೮ ॥

ಎಷ್ಟು ಪೇಳಲಿ ಎನ್ನ ತಾತಾ ಕೃಪಾ । ದೃಷ್ಟಿಯಲಿ ನೋಡು ನಾನಿನ್ನ ಪೋತಾ ॥
ಧಿಟ್ಟ ನೀ ಗುರುಜಗನ್ನಾಥವಿಠಲನ । ನಿನ್ನೊಳಗೆ ತೋರೋ ದಾತಾ ಖ್ಯಾತಾ ॥ ೯ ॥

**ರಾ ಗ – ಮ ಧ್ಯ ಮಾ ವ ತಿ: ತಾ ಳ – ಆ ದಿ ತಾ ಳ**

ಕೋರಿ ಕರೆವೆ ಗುರು ಶ್ರೀರಾಘವೇಂದ್ರನೆ ।
ಬಾರೋ ಮಹಾ ಪ್ರಭುವೆ । ಪ ।

ಚಾರುಚರಣ ಯುಗ ಸಾರಿ ನಮಿಪೆ ಬೇಗ
ಬಾರೊ ಹೃದಯ ಸುಜಸಾರ ರೂಪವ ತೋರೊ । ಅ ಪ ।

ಎಲ್ಲಿ ನೋಡಲು ಹರಿ ಅಲ್ಲಿ ಕಾಣುವನೆಂದು ಕ್ಷುಲ್ಲ ಕಂಭವನೊಡೆದು ನಿಲ್ಲದೆ
ನರಹರಿ ಚೆಲ್ವಿಕೆ ತೋರಿದ ಫುಲ್ಲಲೋಚನ ಶಿಶು ಪ್ರಹ್ಲಾದನಾಗಿ ಬಾರೊ । ೧ ।

ದೋಷ ಕಳೆದು ಸಿಂಹಾಸನವೇರಿದ ದಾಸ ಕುಲವ ಪೊರೆದ ಶ್ರೀಶನರ್ಚಕನಾಗಿ
ಪೋಷಿಸಿ ಹರಿಮತ ವ್ಯಾಸತ್ರಯವಗೈದ ವೇಷ ಕಳೆದು ಬಾರೊ । ೨ ।

ಮೂಜಗಮಾನಿತ ತೇಜೋವಿರಾಜಿತ ಮಾಜದ ಮಹಾಮಹಿಮ ಓಜಗೊಳಿಸಿ ಮತಿ
ರಾಜೀವ ಬೋಧದಿ ಪೂಜೆಗೊಂಬುವ ಗುರುರಾಜ ರೂಪದಿ ಬಾರೊ । ೩ ।

ಮಂತ್ರ ಸದನದೊಳು ಸಂತಸುಜನರಿಗೆ ಸಂತೋಷಸಿರಿ ಗರೆದು ಕಂತುಪಿತನ
ಪದ ಸಂತತ ಸೇವಿಪ ಶಾಂತ ಮೂರುತಿ ಎನ್ನಂತರಂಗದಿ ಬಾರೊ । ೪ ।

ಈ ಸಮಯದಿ ಎನ್ನಾಶೆ ನಿನ್ನೊಳು ಬಲು ಸೂಸಿ ಹರಿಯುತಿಹುದು
ಕೂಸಿಗೆ ಜನನಿ ನಿರಾಶೆಗೊಳಿಸುವಳೆ ದೋಷ ಕಳೆದು ವಿಟ್ಠಲೇಶ ಹೃದಯ ಬಾರೊ।೫।

**ರಾ ಗ – ಅ ಸಾ ವೇ ರಿ : ತಾ ಳ – ಏ ಕ ತಾ ಳ**

ಎದ್ದು ಬರುತಾರೆ ನೋಡೆ ।
ತಾವೆದ್ದು ಬರುತಾರೆ ನೋಡೆ ।ಪ।
ಮುದ್ದು ಬೃಂದಾವನ ಮಧ್ಯದೊಳಗಿದ್ದು ।
ತಿದ್ದಿ ಹಚ್ಚಿದ ನಾಮ–ಮುದ್ರೆಗಳಿಂದೊಪ್ಪುತೀಗ ।ಅ ಪ।
ಗಳದೊಳು ಶ್ರೀತುಳಸಿ–ನಳಿನಾಕ್ಷಿ ಮಾಲೆಯು ।
ಚಲುವ ಮುಖದೊಳು–ಪೊಳೆವೊ ದಂತಗಳಿಂದ ।೧।
ಹೃದಯ ಸದನದಲ್ಲಿ ಪದುಮನಾಭನ ಭಜಿಸಿ
ಮುದಮನದಿಂದ ನಿತ್ಯ–ಸದಮಲ ರೂಪತಾಳಿ ।೨।
ದಾತ ಗುರುಜಗನ್ನಾಥವಿಟ್ಠಲನ್ನ
ಪ್ರೀತಿಯ ಬಡಿಸುತ ದೂತರ ಪೊರೆಯುತ ।೩।

**ರಾ ಗ – ಹಿ ೦ ದೂ ಸ್ಥಾ ನಿ ಕಾ ಪಿ : ತಾ ಳ – ಆ ದಿ ತಾ ಳ**

ಬಂದಾನು ರಾಘವೇಂದ್ರ, ಇಂದಿಲ್ಲಿಗೆ ।ಪ।
ಕಂದನ ಮೊರೆಕೇಳಿ ಜನನಿಯು ಬರುವಂತೆ ।ಅ ಪ।
ಗಜವೇರಿ ಬಂದ, ಜಗದಿ ತಾ ನಿಂದಾ ।
ಅಜಪಿತ ರಾಮನ, ಪದಾಬ್ಜ ಸ್ಮರಿಸುತಲಿ ।೧।
ಹರಿಯ ಕುಣಿಸುತ ಬಂದ, ನರಹರಿ ಪ್ರಿಯ ಬಂದಾ ।
ಶರಣಾಗತರನು ಕರವಪಿಡಿವೆನೆಂದು ।೨।
ಪ್ರಹ್ಲಾದ ವ್ಯಾಸಮುನೀಂದ್ರ, ರಾಘವೇಂದ್ರ ।
ನಿಲಿಸುತ ಮನವ ಮಧ್ವೇಶವಿಟ್ಠಲನಲ್ಲಿ ।೩।

**ರಾ ಗ – ದೇ ಸ್ : ತಾ ಳ – ಆ ದಿ ತಾ ಳ**

ರೋಗ ಹರನೆ ಕೃಪಾಸಾಗರ ಶ್ರೀಗುರು ರಾಘವೇಂದ್ರ ಪರಿಪಾಲಿಸೊ ।ಪ।
ಸಂತತ ದುರ್ವಾದಿಧ್ವಾಂತ ದಿವಾಕರ ಸಂತ ವಿನುತ ಮಾತ ಲಾಲಿಸೊ ।೧।
ಪಾವನಗಾತ್ರ ಸುದೇವವರ ತವ ಸೇವಕರೊಳಗಾಡಿಸೊ ।೨।
ಘನ್ನಮಹಿಮ **ಜಗನ್ನಾಥವಿಟ್ಠಲಪ್ರಿಯ** ನಿನ್ನಾರಾಧನೆ ಮಾಡಿಸೊ ।೩।

**ರಾ ಗ – ಪೂ ರ್ವಿ : ತಾ ಳ – ಮ ಠ್ಯ ತಾ ಳ**

ಯಾಕೆ ಮೂಕನಾದ್ಯೋ ಗುರುವೆ ನೀ ಯಾಕೆ ಮೂಕನಾದ್ಯೋ ।ಪ।
ಯಾಕೆ ಮೂಕನಾದೆ ಲೋಕಪಾಲಕ ಎನ್ನ
ಸಾಕುವರ್ಯಾರಯ್ಯ ಶ್ರೀಕರ ರಾಘವೇಂದ್ರ ।ಅ ಪ।
ಹಿಂದಕ್ಕೆ ನೀ ಎನ್ನ ಮುಂದೆ ಸುಳಿದಾಡಿದೆ
ಮಂದಿಯೊಳಗೆ ಎನ್ನ ಮಂದನ್ನ ಮಾಡಿದ್ಯೊ ।೧।
ಬೇಕಾಗದಿದ್ದರಿನ್ಯಾಕೆ ಕೈಯನು ಪಿಡಿದೆ
ಕಾಕುಜನರೊಳೆನ್ನ ನೂಕಿಬಿಟ್ಟು ನೀನು ।೨।
ಈಗ ಪಾಲಿಸದಿರೆ ಯೋಗಿಕುಲವರ್ಯ
ರಾಘವೇಂದ್ರನೆ ಭವ ಸಾಗುವದ್ಹ್ಯಾಂಗಯ್ಯ ।೩।
ನಿನ್ನಂಥ ಕರುಣೆಲ್ಲ ಎನ್ನಂಥ ಕೃಪಣೆಲ್ಲ
ಘನ್ನಮಹಿಮ ನೀ ಎನ್ನನು ಬಿಟ್ಟೀಗ ।೪।
ಜನನಿಯು ನೀ ಎನ್ನ ಜನಕನಯ್ಯ
ಮನ್ನಿಸೊ ನೀ ನಿತ್ಯಾನನ್ಯ ಶರಣನೆ ।೫।
ಎಂದಿಗಾದರು ನಿನ್ನ ಪೊಂದಿಕೊಂಡವನೆಲೊ
ಇಂದು ನೀ ಕೈಬಿಟ್ಟರೆನ್ನ ಮುಂದೆ ಕಾಯುವರ್ಯಾರೊ ।೬।
ನಾಥನು ನೀ ಅನಾಥನು ನಾನಯ್ಯ
ಪಾತಕರಿಗೆ ಗುರು ಜಗನ್ನಾಥವಿಟ್ಠಲದೂತ ।೭।

**ರಾ ಗ – ಯ ದು ಕು ಲ ಕಾ ಂ ಬೋ ದಿ : ತಾ ಳ – ಆ ದಿ ತಾ ಳ**

ರಾಘವೇಂದ್ರ ಗುರುರಾಯರ ಸೇವಿಸಿರೊ । ಸೌಖ್ಯದಿ ಜೀವಿಸಿರೊ । ಪ ।
ತುಂಗಾತೀರದಿ ರಘುರಾಮನ ಪೂಜಿಪರೊ । ನರಸಿಂಗನ ಭಜಕರೊ । ಅ ಪ ।

ಶ್ರೀ ಸುಧೀಂದ್ರಕರ ಸರೋಜ ಸಂಜಾತ । ಜಗದೊಳಗೆ ಪುನೀತ ।
ದಾಶರಥಿಯ ದಾಸತ್ವವ ತಾ ವಹಿಸೀ । ದುರ್ಮತಗಳ ಜಯಿಸೀ ।
ಈ ಸಮೀರಮತ ಸಂಸ್ಥಾಪಕರಾಗೀ । ನಿಂದಕರನು ನೀಗೀ ।
ಭೂಸುರರಿಗೆ ಸಂಸೇವ್ಯ ಸದಾಚರಣೇ । ಕಂಗೊಳಿಸುವ ಕರುಣೇ । ೧ ।

ಕುಂದದೆ ವರ ಮಂತ್ರಾಲಯದಲ್ಲಿರುವ । ಕರೆದಲ್ಲಿಗೆ ಬರುವ ।
ಬೃಂದಾವನ ಗತ ಮೃತ್ತಿಕೆ ಜಲಪಾನ । ಮುಕ್ತಿಗೆ ಸೋಪಾನ ।
ಸಂದರುಶನ ಮಾತ್ರದಲಿ ಮಹತ್ಪಾಪ । ಬಡಿದೋಡಿಸಲಾಪ ।
ಮಂದಭಾಗ್ಯರಿಗೆ ದೊರೆಯದಿವರ ಸೇವ । ಶರಣರ ಸಂಜೀವ । ೨ ।

**ಶ್ರೀದವಿಟ್ಠಲನ** ಸನ್ನಿಧಾನ ಪಾತ್ರ । ಸಂಸ್ತುತಿಸಿದ ಮಾತ್ರ ।
ಮೋದಪಡಿಸುತಿಹ ತಾನಿಹಪರದಲ್ಲಿ । ಈತಗೆ ಸರಿಯಿಲ್ಲಿ ।
ಮೇದಿನಿಯೊಳಗಿನ್ನರಸಲು ನಾ ಕಾಣೆ । ಪುಸಿಯಲ್ಲೆನ್ನಾಣೆ ।
ಪಾದಸ್ಮರಣೆಯ ಮಾಡದವನೆ ಪಾಪಿ । ನಾ ಪೇಳುವೆ ಸ್ಥಾಪಿ । ೩ ।

**ರಾ ಗ – ಕ ಲ್ಯಾ ಣಿ : ತಾ ಳ – ಆ ದಿ ತಾ ಳ**

ವೃಂದಾವನ ನೋಡಿರೊ ।
ಗುರುಗಳ ವೃಂದಾವನ ಪಾಡಿರೊ । ಪ ।

ವೃಂದಾವನ ನೋಡಿ ಆನಂದ ಮದವೇರಿ
ಚೆಂದದಿ ದ್ವಾದಶ ಪುಂಡ್ರಾಂಕಿತಗೊಂಬ । ಅ ಪ ।
ತುಂಗಭದ್ರಾ ನದಿಯ ತೀರದಲಿ
ಉತ್ತುಂಗ ಮಂಟಪದ ಮಧ್ಯದಿ
ಶೃಂಗಾರ ತುಳಸಿ ಶ್ರೀಪದ್ಮಾಕ್ಷಸರಗಳಿಂದ
ಮಂಗಳಕರ ಮಹಾ ಮಹಿಮೆಯಿಂದೊಪ್ಪುವ । 1 ।

ದೇಶ ದೇಶದಿ ಮೆಚ್ಚುತ ಇಲ್ಲಿಗೆ
ಬಂದು ವಾಸವಾಗಿ ಸೇವಿಪ ।
ಭಾಷೆ ಕೊಟ್ಟಂದದಿ ಬಹುವಿಧವರಗಳ
ಸೂಸುವ ವರಮಹಾ ಮಹಿಮೆಯಿಂದೊಪ್ಪುವ । 2 ।

ನಿತ್ಯ ಸನ್ನಿಧಿ ಸೇವಿಪ ಭಕ್ತರಿಗೆಲ್ಲ
ಮತ್ತೆ ಅಭೀಷ್ಟವ ಕೊಡುವ ।
ಸತ್ಯದಿ ಗುಣಸಿಂಧು ವೆಂಕಟವಿಟ್ಠಲನ
ನಿತ್ಯ ಸನ್ನಿಧಿಯಿಂದ ನಿರುತ ಪೂಜೆಯಗೊಂಬ । 3 ।

**ರಾ ಗ – ಸೌ ರಾ ಷ್ಟ್ರ : ತಾ ಳ – ಆ ದಿ ತಾ ಳ**

ಪೊಂದಿ ಬದುಕಿರೊ ರಾಘವೇಂದ್ರರಾಯರ
ಕುಂದದೆಮ್ಮನು ಕರುಣದಿಂದ ಪೊರೆವರ ।ಪ।
ನಂಬಿ ತುತಿಸುವ ಜನಕದಂಬಕಿಷ್ಟವ
ತುಂಬಿಕೊಡುವನು ಅನ್ಯರ ಹಂಬಲೀಯನು ।೧।
ಅಲವಬೋಧರ ಸುಮತ ಜಲಧಿಚಂದಿರ
ಒಲಿದು ಭಕ್ತರ ಕಾವ ಸುಲಭ ಸುಂದರ ।೨।
ಗುರುಸುಧೀಂದ್ರರ ವಿಮಲಕರಜರೆನಿಪರ
ಸ್ಮರಿಸಿ ಸುರುಚಿರ ಚರಣಯುಗಳ ಪುಷ್ಕರ ।೩।
ಫಾಲಲೋಚನ ವಿನುತ ಮೂಲರಾಮನ
ಶೀಲಸದ್ಗುಣ ತುತಿಪ ಶೀಲರನುದಿನ ।೪।
ಭೂತಭಾವನ **ಜಗನ್ನಾಥವಿಟ್ಠಲನ**
ಪ್ರೀತಿಪಾತ್ರನ ನಂಬಿರೀತನೀಕ್ಷಣ ।೫।

**ರಾ ಗ – ಪೂ ರ್ವಿ : ತಾ ಳ – ಆ ದಿ ತಾ ಳ**

ರಥವಾನೇರಿದ ರಾಘವೇಂದ್ರ । ಸದ್ಗುಣಗಳ ಸಾಂದ್ರ ।ಪ।

ಸತತ ಮಾರ್ಗದಿ ಸಂತತ ಸೇವಿಪರಿಗೆ ।
ಅತಿಹಿತದಲಿ ಮನೋರಥವ ಕೊಡುವೆನೆಂದು ।ಅ ಪ।

ಚತುರ ದಿಕ್ಕು ವಿದಿಕ್ಕುಗಳಲ್ಲಿ ।
ಚರಿಪಾಜನರಲ್ಲಿ ಮಿತಿಯಿಲ್ಲದೆ ಬಂದು ಓಲೈಸುತಲಿ ।
ವರವಾ ಬೇಡುತಲಿನುತಿಸುತ ಪರಿಪರಿ ನತರಾಗಿ
ಹರಿಗೆ ಗತಿಪೇಳದೆ ಸರ್ವಥಾ ಬಿಡೆನೆಂದು ।೧।
ಅತುಳ ಮಹಿಮಾನಾ ದಿನದಲ್ಲಿ ।

ದಿತಿಜಾವಂಶದಲಿ ಉತ್ಪತ್ತಿಯಾಗಿ ಉಚಿತಾದಲ್ಲಿ ।
ಉತ್ತಮ ಮತಿಯಲ್ಲಿಅತಿಶಯವಿರುತಿರೆ ಪಿತನ ಬಾಧೆಗೆ
ಮನ್ಮಥ ಪಿತನೊಲಿಸಿದ ಜಿತ ಕರುಣದಲಿ ।೨।

ಪ್ರಥಮ ಪ್ರಹ್ಲಾದ ವ್ಯಾಸಮುನಿಯೆ ।
ಯತಿರಾಘವೇಂದ್ರ ಪತೀತರೋದ್ಧಾರಿಯೆ ಪಾವನಕಾರಿಯೇ ।
ಕರಮುಗಿವೆನು ದೊರೆಯೆ ।
ಕ್ಷಿತಿಯೊಳು ಗೋಪಾಲವಿಟ್ಠಲನ ಸ್ಮರಿಸುತ
ಪ್ರತಿ ಮಂತ್ರಾಲಯದೊಳು ಅತಿ ಮೆರೆವ ।೩।

**ರಾ ಗ – ಧ ನ್ಯಾ ಶ್ರೀ : ತಾ ಳ – ಏ ಕ ತಾ ಳ**

ಗುರು ರಾಘವೇಂದ್ರರ ಚರಣ ಕಮಲವನ್ನು ಸ್ಮರಿಸುವ ಮನುಜರಿಗೆ ।ಪ।
ಕರೆಕರೆಗೊಳಿಸುವ ದುರಿತ ದುಷ್ಕೃತವೆಲ್ಲ
ಕರಿಯು ಕಂಡ ಸಿಂಹನ ತೆರನಾಗುವುದಯ್ಯ ।ಅ ಪ।
ಗುರುಮಧ್ವಮತವೆಂಬ ವರ ಕ್ಷೀರಾಂಬುಧಿಯಲ್ಲಿ
ಹರ ಧರಿಸಿದ ಶಶಿಯಂತುದಿಸಿ ಪರಮತ
ತಿಮಿರಕ್ಕೆ ತರಣಿ ಕಿರಣನೆನಿಸಿ ಪಿರಿದು
ಮೆರೆವ ಸಿರಿರಾಮನರ್ಚಕರಾದ ।೧।

ಹರಿಯೆ ಸರ್ವೋತ್ತಮ ಸಿರಿಯು ಆತನ ರಾಣಿ
ಪರಮೇಷ್ಟಿ ಮರುತರೆ ಗುರುಗಳೆಂದು
ಗರುಡಶೇಷರುದ್ರ ಸಮರೆಂದು ಸ್ಥಾಪಿಸಿ
ಸ್ಥಿರ ತಾರತಮ್ಯ ಪಂಚಭೇದ ಸತ್ಯವೆಂಬ ।೨।

ಅಂಧಕರಿಗೆ ಚಕ್ಷು ವಂದ್ಯರಿಗೆ ಸುರತರು

ಬಂದಬಂದವರಭೀಷ್ಟಗಳನಿತ್ತು
ಒಂದಾರುನೂರುವತ್ಸರ ವೃಂದಾವನದಲ್ಲಿ
ಚೆಂದಾಗಿ ನಿಂದು ಮೆರೆವ ಕೃಪಾಸಿಂಧು ।೩।

‘ರಾ’ ಎನ್ನೆ ದುರಿತರಾಶಿಗಳ ದಹಿಸುವ
‘ಘ’ ಎನ್ನೆ ಘನಜ್ಞಾನ ಭಕುತಿ ಈವ
‘ವೇಂ’ ಎನ್ನೆ ವೇಗದಿ ಜನನಮರಣ ದೂರ
‘ದ್ರ’ ಎನ್ನೆ ದ್ರವಿಣಾರ್ಥ ಶ್ರುತಿ ಪ್ರತಿಪಾದ್ಯನ ಕಾಂಬ ।೪।

ವರ ತುಂಗಾತೀರ ಮಂತ್ರಾಲಯ ಪುರದಲ್ಲಿ
ಪರಿಪರಿ ಸೇವೆ ಭೂಸುರರಿಂದ ಕೊಳುತ
ಸಿರಿಯರಮಣ ನಮ್ಮ ಗೋಪಾಲವಿಟ್ಠಲನ
ಚರಣ ಸೇವಿಸುತಿಪ್ಪ ಗುರುಶಿಖಾಮಣಿಯಾದ ।೫।

**ರಾಗ – ಶಂಕರಾಭರಣ : ತಾಳ – ಆದಿತಾಳ**

ರಾಘವೇಂದ್ರ ಯತಿ ಸಾರ್ವಭೌಮ ದುರಿತೌಘ ದೂರ ತೇ ನಮೋ ನಮೋ
ಮಾಗಧರಿಪುಮತ ಸಾಗರ ಮೀನ ಮಹಾಘ ವಿನಾಶನ ನಮೋ ನಮೋ
ಶ್ಲಾಘಿತ ಗುಣಗಣ ಸೂರಿ ಪ್ರಸಂಗ ಸದಾಗಮಜ್ಞ ತೇ#ನಮೋ ನಮೋ
ಮೇಘಶ್ಯಾಮಲ ರಾಮಾರಾಧಕ ಅಮೋಘ ಬೋಧತೇ ನಮೋ ನಮೋ ।೧।

ತುಂಗಭದ್ರ ಸುತರಂಗಿಣಿ ತೀರಗ ಮಂಗಳಚರಿತ ಶುಭಾಂಗ ನಮೋ
ಇಂಗಿತಜ್ಞ ಕಾಳಿಂಗಮಥನ ಯದುಪುಂಗವ ಹೃದಯಸುಸಂಗ ನಮೋ
ಸಂಗಿರ ಚಿನ್ಹಿತ ಶೃಂಗಾರಾನನ ತಿಂಗಳ ಕರುಣಾಪಾಂಗ ನಮೋ
ಗಾಂಗೇಯ ಸಮಭಾಂಗ ಕುಮತ ಮಾತಂಗ ಸಂಘ ಶಿತಪಿಂಗ ನಮೋ ।೨।

ಶ್ರೀಸುಧೀಂದ್ರಕರಜಾತ ನಮೋ ನಮೋ ಭೂಸುರ ವಿನುತ ವಿಖ್ಯಾತ ನಮೋ
ದೇಶಿಕವರ ಸಂಸೇವ್ಯ ನಮೋ ನಮೋ ದೋಷ ವಿವರ್ಜಿತ  ಕಾವ್ಯ ನಮೋ
ಕ್ಲೇಶಿತಜನ ಪರಿಪಾಲ ನಮೋ ನಮೋ ಭಾಸಿತ ಕರುಣಾಶೀಲ ನಮೋ
ವ್ಯಾಸ ರಾಮಪದ ಭಕ್ತ ನಮೋ ನಮೋ ಶಾಶ್ವತ ಧರ್ಮಾಸಕ್ತ ನಮೋ ನಮೋ । ೩ ।

ಕೋವಿದ ಮಸ್ತಕ ಶೋಭಿತಮಣಿ ಸಂಭಾವಿತ ಸುಮಹಿಮ ಪಾಲಯ ಮಾಂ
ಸೇವಾಪರ ಸರ್ವಾರ್ಥಪ್ರದ ವೃಂದಾವನ ಮಂದಿರ ಪಾಲಯ ಮಾಂ
ಭಾವಜ ಮಾರ್ಗಣ ಭುಜಗವಿನಾಯಕ ಭಾವಜ್ಞ ಪ್ರಿಯ ಪಾಲಯ ಮಾಂ
ಕೇವಲ ನತಜನ ಪಾವನರೂಪಿ ಸದಾ ವಿನೋದಿ ಹೇ ಪಾಲಯ ಮಾಂ   । ೪ ।

ಸನ್ನುತ ಮಹಿಮ ಜಗನ್ನಾಥವಿಟ್ಠಲ ಸನ್ನಿಹಿತ ಮಾನಸ ಜಯಜಯ ಭೋ
ಚಿನ್ಹಿತ ಪುಂಡ್ರ ಕಮಂಡಲ ದಂಡ ಪ್ರಪನ್ನ ಭಯಾಪಹ ಜಯಜಯ ಭೋ
ಮಾನ್ಯ ಮಹಾತ್ಮ ಪ್ರಸನ್ನವದನ ಕಾರುಣ್ಯ ಪಯೋನಿಧೆ ಜಯಜಯ ಭೋ
ಧನ್ಯ ಕ್ಷಮಾ ಸಂಪನ್ನ ಧರಾಮರ ಶರಣ್ಯ ಶಾಶ್ವತ ಜಯಜಯ ಭೋ      । ೫ ।

## ರಾಗ : ಮಧ್ಯಮಾವತಿ ಅಟತಾಳ

### ಸ್ವಸ್ತಿ ಶ್ರೀ ಜಯಮಂಗಳಂ ॥ ಪ ॥

ಸ್ವಸ್ಥಚಿತ್ತದಿ ಹರಿಯ ಭಜಿಪಗೆ । ಹಸ್ತಿವರದನ ದಾಸವರ್ಯಗೆ   ॥
ಹಸ್ತದಿಂದಖಿಳಾರ್ಥ ದಾತಗೆ । ಸ್ವಸ್ತಿಕರ ಗುರುರಾಘವೇಂದ್ರಗೆ   ॥ ೧ ॥
ನತಿಪಜನ ಸುರಧೇನು ಎನಿಪಗೆ । ಸತತ ಸ್ವಾಶ್ರಿತ ಪಾಲಗೆ ।
ವಿತತ ಸನ್ಮತಿದಾತ ಖ್ಯಾತಗೆ । ತುತಿಪರನುದಿನ ಪೊರೆವೊ ನಾಥಗೆ ॥ ೨ ॥
ಪಾತಕಾಂಬುಧಿಕುಂಭಜಾತಗೆ । ಪಾತಕಾದ್ರಿಕುಲಿಶರೂಪಗೆ ॥
ದಾತ ಗುರುಜಗನ್ನಾಥವಿಠಲ । ದೂತ ಜನಕತಿ ಪ್ರೀತಗೆ        ॥ ೩ ॥

## ರಾಗ : ಕಾಂಬೋಧಿ ಝಂಪಾತಾಳ

ಸ್ಮರಿಸಿ ಬೇಡುವೆನು ನಾ, ಹೇ । ಗುರುಸಾರ್ವಭೌಮಾ ॥ ಪ ॥
ನಿರುತ ನೀಪೊರೆ ಎನ್ನ ವಾದಿಗಜ ಸಿಂಹ ॥ ಅ ಪ ॥
ದಿತಿ ಸುತಗೆ ಸುತನೆನಿಸಿ ಅತಿ ಮುದದಿ ಸುರಮುನಿಯ
ಮತ ಹಿಡಿದು ಹರಿ ಮಹಿಮೆ ಪಿತಗೆ ಪೇಳಿ ॥
ಖತಿಗೊಂಡು ನಿನ್ನ ಮೂರುತಿ ತೋರೆನಲು ಶ್ರೀ-
ಪತಿಯ ಸ್ತಂಭದಿ ಕರೆದ ಪ್ರಲ್ಹಾದರಾಜ ॥ ೧ ॥
ಬಾಲ್ಯದಲಿ ಯತಿಯಗಿ ಲೀಲೆಯಿಂದಲಿ ಭೂಮಿ-
ಪಾಲಗೊದಗಿರ್ದ ಕುಹುಯೋಗ ಬಿಡಿಸಿ ॥
ಖೂಳ ಮಾಯ್ಗಳ ಜಯಿಸಿ ಚಂದ್ರಿಕಾಗ್ರಂಥವನು
ಪೇಳಿ ಹರಿ ಪೀಠ ವೇರಿದ ವ್ಯಾಸರಾಜ ॥ ೨ ॥
ಕಾಮರಿಪುನುತ ಮೂಲ ರಾಮ ಪದಯುಗ ಕುಮುದ
ಸೋಮನೆನಿಸುವ ಭಕ್ತಸ್ತೋಮಕೆಲ್ಲ ॥
ನೇಮದಿಂದಲಿ ವಿವಿಧ ಕಾಮಿತಾರ್ಥ ಸ್ಫುಟಿತ
ಹೇಮ ಸನ್ನಿಭಗಾತ್ರ ಪಾವನ ಚರಿತ್ರ ॥ ೩ ॥
ಶಾಂತತೆಯ ಪೊಂದಿ ಮಂತ್ರಾಲಯದಿ ವೃಂದಾವ-
ನಾಂತರದೊಳಿರುತ ಶಿರಿಕಾಂತ ಹರಿಯಾ ॥
ಚಿಂತಿಸುತಲಿಹ ಸರ್ವತಂತ್ರ ಸ್ವತಂತ್ರ ಕರು-
ಣಾಂತರಂಗನೆ ರಾಘವೇಂದ್ರಯತಿವರ್ಯಾ ॥ ೪ ॥
ಮೂಕ ಬಧಿರಾಂಧತ್ವಗಳ ಪೊಂದಿ ಧರಣಿಯೊಳು
ವ್ಯಾಕುಲವ ಪಡುವವರನುದ್ಧರಿಸುತ ॥
ನಾಕಪತಿ ವಿನುತ ಜಗನ್ನಾಥ ವಿಠಲ ಮಧು ಪ
ನೀ ಕೊಟ್ಟು ಸಲಹೆನ್ನಭೀಷ್ಟ ಸಮುದಾಯ ॥ ೫ ॥

**ರಾಗ : ಧನಶ್ರೀ ಅಟತಾಳ**

ವಿನಯದಿಂದಲಿ ನಮಿಸುವೆನಾ ವೃಂದಾವನದಿ ರಾಜಿಪ ರಾಘವೇಂದ್ರ ಗುರುವರನ ।ಪ।
ದುರಿತವಾರಣ ಪಂಚಾನನ ನರಹರಿರೂಪ ಸ್ತಂಭದಿ ಪ್ರಕಟಗೈಸಿದನ ॥
ಹರಿಭಕ್ತಾಗ್ರಣಿ ಎಂದೆನಿಪನ ನಾರದರ ಉಪದೇಶ ಗರ್ಭದಿ ಕೈಕೊಂಡಿಹನ ॥ ೧ ॥
ಸಿರಿವ್ಯಾಸತೀರ್ಥರೆನಿಪನ ಪುರಂದರ ದಾಸಾರ್ಯರಿಗುಪದೇಶ ಗೈದವನ ॥
ವರ ಚಂದ್ರಿಕಾ ರಚಿಸಿದ ದುಷ್ಟ ಪರಮತಾದ್ರಿಗಳಿಗೆ ಕುಲಿಶನೆನಿಪನ ॥ ೨ ॥
ಶ್ರೀಸುಧೀಂದ್ರಕರಾಬ್ಜಜನ ದಿವ್ಯ ಭಾಸುರ ಪರಿಮಳ ಗ್ರಂಥಕರ್ತನ ॥
ಮೀಸಲಮನದಿ ಭಜಿಪರ ದೋಷ ನಾಶನಗೈಸಿ ಪೋಷಿಸುವಶಕ್ತನ ॥ ೩ ॥
ವರಮಂತ್ರಸದ್ಮನಿಲಯನ ಶ್ರೀ ಗುರುಮಧ್ವಮತದುರಂಧರನೆನಿಸುವ ॥
ಹರಿಪ್ರೀತಿಪೂರ್ಣಪಾತ್ರನ ಈ ಧರೆಯೊಳು ಬಹುಪರಿಮೆರೆವ ಮುನಿಪನ ॥ ೪ ॥
ತುಂಗಾಭದ್ರತೀರವಾಸನ ಶುಭ ಮಂಗಳಚರಿತ ಕಮಂಡಲಧರನ ॥
ರಂಗ ವರದೇಶವಿಠಲನ ಪದ ಭೃಂಗ ಯತಿಕುಲ ಕುಜಾರ್ಕ ಸನ್ನಿಭನ ॥ ೫ ॥

ರಾಗ : ಸೌರಾಷ್ಟ್ರ ಅಟ್ಟತಾಳ

ಮಂಗಳಂ ಮಂಗಳಂ । ಜಯ
ಮಂಗಳಂ ಶ್ರೀಸುಧೀಂದ್ರಾಬ್ಧಿಜ ಚಂದ್ರ ॥ ಪ ॥
ನಾಭಿಜ ನಾಬಿಜ ನಾಭಿಜ ಪದಕಂಜ
ಶೋಭಿತ ಕೇಳಿ ಬಿಡಿದೆಮ್ಮ ನಾಳಿ ॥ ೧ ॥
ಕೋಲಜ ಕೂಲ ಸುಸ್ಲೀಲ ಮಂತ್ರಾ ಮಂದಿ–
ರಾಲಯ ವಾಲಯ ಪಾಲಯ ಮಾಂ ಗುರು ॥ ೨ ॥
ಎನೇನು ಮಾಡಲು ನೀನೊಲಿಯದಲೆಂದು
ಪ್ರಾಣೇಶವಿಠಲನ ಕಾಣರೊ ಜನರು ॥ ೩ ॥

**ರಾಗ : ಭೈರವಿ ಝಂಪಾತಾಳ**

ಜಯಮಂಗಳಂ ನಿತ್ಯ ಶುಭಮಂಗಳಂ ॥ ಪ ॥
ಶ್ರೀರಾಮಚಂದ್ರಾಂಘ್ರಿ ಸರಸಿರುಹ ಬೃಂಗನಿಗೆ ।
ಧೀರ ಸುಧೀಂದ್ರರ ಕರಸಂಭೂತಗೆ ।
ವಾರಾಹಿತೀರ ಮಂತ್ರಾಲಯ ನಿಕೇತನಿಗೆ ।
ಶ್ರೀರಾಘವೇಂದ್ರರಾಯರ ಚರಣಕೆ ॥ ೧ ॥
ಪರಮತಧ್ವಾಂತ ಭಾಸ್ಕರಗೆ ಸ್ವರ್ಣಾಭಗೆ ।
ಶರಣರಭಿಲಾಷೆ ಪೂರೈಸುವರಿಗೆ ।
ದರುಶನಾದಿ ತ್ರಿಭಾಷದರ್ಥ ಬಲ್ಲವರಿಗೆ ।
ಮರುತ ಮತ ಕಡಲಿಗುಡುಪತಿಯೆನಿಪಗೆ ॥ ೨ ॥
ಪ್ರಾಣೇಶವಿಠಲನವರೊಳು ಪ್ರೀತಿಯುಳ್ಳವರಿಗೆ ।
ಕ್ಷೋಣಿಯೊಳು ಸರಿಯಿಲ್ಲದ ಮಹಿಮನಿಗೆ ॥
ಧ್ಯಾನಕ್ಕೆ ಬಂದೊದಗುತಿಪ್ಪ ಗುರುರಾಯರಿಗೆ ।
ಮೀನಾಂಕಜಿತ ದೇಶಿಕವರ್ಯಗೆ ॥ ೩ ॥

**ರಾಗ : ಭೈರವಿ ಝಂಪಾತಾಳ**

ಜಯಮಂಗಳಂ ನಿತ್ಯ ಶುಭಮಂಗಳಂ ॥ ಪ ॥
ಯೋಗೀಂದ್ರತೀರ್ಥಕರ ರಾಜೀವ ಪೂಜಿತಗೆ ।
ಭಾಗವತ ಜನಪ್ರಿಯರೆನಿಸುವವರಿಗೆ ॥
ಯೋಗಿಗಳಧಿಪತಿ ಸುಧೀಂದ್ರಕರಜಾತರಿಗೆ ।

ಬಾಗಿ ವಂದಿಪರ ಸಲಹುವ ಸ್ವಾಮಿಗೆ ॥ ೧ ॥
ವರಹಜಾತೀರ ಮಂತ್ರಾಲಯ ನಿಕೇತನಿಗೆ ।
ಧರಣಿಯೊಳಗಪ್ರತಿಮ ಚರಿತೆ ತೋರ್ವವಗೆ ।
ಕುರುಡ ಕಿವುಡಾದಿಗಳ ಬಯಕೆ ಪೂರೈಪರಿಗೆ ।
ವರಸು ವೃಂದಾವನದಿ ಶೋಭಿಪರಿಗೆ ॥ ೨ ॥
ಆರಾಧನೆಯ ಜನರು ಮಾಡುವದು ನೋಡಲ್ಕೆ ।
ವಾರ ವಾರಕ್ಕಧಿಕ ವೆನೆಸುವರಿಗೆ ॥
ಮಾರಮಣ ಪ್ರಾಣೇಶವಿಠಲಂಘ್ರಿ ಜಲಜಕೆ ।
ಆರುಪದವೆನಿಪಗೆ ಕರುಣಾ ಜಲಧಿಗೆ ॥ ೩ ॥

## ರಾಗ : ರೇಗುಪ್ತಿ ಏಕತಾಳ

*ರಥವಾನೇರಿದ ಯತಿವರನ್ಯಾರೇ ಪೇಳಮ್ಮಯ್ಯಾ ॥ ಪ ॥*
*ವಿತತ ಮಹಿಮಾ ನತ ಜನರನತಿ ।*
ಹಿತದಿ ಪಾಲಿಸುವ ಅತುಲಮಹಿಮ ಕಾಣಮ್ಮ ॥ ಅ ಪ ॥

ಧರೆಯೊಳು ವೈಭವದಿಂದಲಿ । ಮೆರೆಯುವನ್ಯಾರೇ ಪೇಳಮ್ಮಯ್ಯಾ ।
ಪರಮಾದ್ಭುತ ಚರಿಯುವ ಮಾಡುತ । ಸರಿಯಿಲ್ಲದಿರುವ ನ್ಯಾರೇ ಪೇಳಮ್ಮಯ್ಯಾ ॥

ಸ್ಮರಿಸುವ ಭಕುತರ ಪರಿ । ಪರಿ ಸಲಹುವನ್ಯಾರೇ ಪೇಳಮ್ಮಯ್ಯಾ ।
ಹರಿಭಕ್ತಾಗ್ರಣಿ ಎನಿಪ ಯತಿಕುಲ । ಗುರುವರ ರಾಘವೇಂದ್ರ ಕಾಣಮ್ಮಾ ॥ ೧ ॥
ಸ್ತುತಿಸುವ ಜನರಿಗೆ ಸತಿಸುತ ಸಂಪದ। ವತಿಶಯ ನೀಡುವನ್ಯಾರೇ ಪೇಳಮ್ಮಯ್ಯಾ ।

ಮತಿರಹಿತರಿಗೆ ಸುಮತಿಯ ನೀಡುವನದ್ಭುತ ಮಹಿಮನು ಯಾರೇ ಪೇಳಮ್ಮಯ್ಯಾ॥

ಇತರ ದಿವಿಜರಿಗಸಾಧ್ಯವೆನಿಸುವ ಅತುಲ ಪರಾಕ್ರಮನ್ಯಾರೇ ಪೇಳಮ್ಮಯ್ಯಾ ।
ಭೂತಳಜನನಾಥನೆನಿಸಿ ಮಹಾ ಭೂತಿದಾಯಕ ರಾಘವೇಂದ್ರ ಕಾಣಮ್ಮಾ ॥ ೨ ॥

ಭೂತಳ ಜನರ ವ್ರಾತಕೆ ನಿಜಸು ದಾತನು ಯಾರೇ ಪೇಳಮ್ಮಯ್ಯಾ ।
ಭೂತ ಪ್ರೇತ ಪಿಶಾಚ ಸುಮಹದ್ಭೀತಿಯ ಬಿಡಿಸುವನ್ಯಾರೇ ಪೇಳಮ್ಮಯ್ಯಾ ॥

ಪಾತಕವನಕುಲವೀತಿಹೋತ್ರ ಸುಖವ್ರಾತದನೆನಿಸುವನ್ಯಾರೇ ಪೇಳಮ್ಮಯ್ಯಾ ।
ದಾತ ಗುರುಜಗನ್ನಾಥವಿಠಲ ಪದದೂತನೆನಿಪ ಗುರುರಾಯ ಕಾಣಮ್ಮ ॥ ೩ ॥

ರಾಗ : ಕಾಂಬೋಧಿ ಏಕತಾಳ

ಮಂಗಳಂ ಶ್ರೀರಾಘವೇಂದ್ರಗೆ । ಶುಭಮಂಗಳ ಸುಜನಾಂಬುಧಿ ಚಂದ್ರಗೆ ॥ ಪ ॥

ಶ್ರೀಸುಧೀಂದ್ರಕುಮಾರಗೆ ಮಂಗಳ । ಭೂಸುರನುತ ಮಹಿಮಗೆ ಮಂಗಳ ॥
ದೇಶಿಕಕುಲ ವನಜಾರ್ಕಗೆ ಮಂಗಳ ।ಭಾಸುರ ಕೀರ್ತಿಯ ಪಡೆದವನಿಗೆ ॥ ೧ ॥

ವೃಂದಾವನ ದಿವಿಯೊಳಗೆ ಸುರದ್ರುಮ ।ದಂದದಿ ರಾಜಿಸುವವಗೆ ಮಂಗಳ ॥
ಅಂಧ ಪಂಗು ಮೂಕ ಬಧಿರರೀಪ್ಸಿತ । ಸಂದೋಹ ಸಲಿಸುವ ಸ್ವಾಮಿಗೆ ॥ ೨ ॥
ಭೂತಪ್ರೇತ ಭೇತಾಳ ಭಯವಿಪಿನ । ವೀತಿಹೋತ್ರ ನೆನಿಪಗೆ ಮಂಗಳ ॥
ವಾತಜನಕ ಜಗನ್ನಾಥವಿಠಲನ । ದೂತರ ಸಲಹುವ ದಾತನಿಗೆ ಮಂಗಳಂ ॥ ೩ ॥

## ರಾಗ : ಆನಂದಭೈರವಿ ಆದಿತಾಳ

ಸ್ವಾಮಿಲಾಲಿ ಭಕ್ತಪ್ರೇಮಿ ಲಾಲಿ । ಕಾಮದೆನಿಪ ಗುರುಸಾರ್ವಭೌಮ ಲಾಲಿ ॥ ಪ ॥
ಇಂದ್ರಲಾಲಿ ರಾಘವೇಂದ್ರ ಲಾಲಿ ।ಸಾಂದ್ರಭಕ್ತಕುಮುದ ಪೂರ್ಣಚಂದ್ರಲಾಲಿ ॥ ೧॥
ತರುಣಿಲಾಲಿ ನಿಜ ಕರುಣಿಲಾಲಿ । ಶರಣ ಜನರ ಕಾಯ್ವ ಗುಣಪೂರ್ಣಲಾಲಿ ॥ ೨॥
ದೇವ ಲಾಲಿ ನಿಜಭಾವ ಲಾಲಿ । ಭಾವಿಸುವರ ನಿತ್ಯ ನೀ ಕಾವ ಲಾಲಿ ॥ ೩ ॥
ರಾಜ ಲಾಲಿ ಕಲ್ಪಭೂಜ ಲಾಲಿ । ರಾಜಿಸುವ ಯತಿಕುಲತೇಜ ಲಾಲಿ ॥ ೪ ॥
ದಾತಲಾಲಿ ನಿಜತಾತ ಲಾಲಿ । ಪ್ರೀತ ಗುರುಜಗನ್ನಾಥವಿಠಲದೂತ ಲಾಲಿ ॥ ೫ ॥